# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಆಗಸ್ಟ್ ೨೧, ೨೦೧೪ (ಶ್ರಾವಣ ೩೦, ಶಕ ವರ್ಷ ೧೯೩೬)<br>Bangalore, Thursday, August 21, 2014 (Shravana 30, Shaka Varsha 1936) | ಸಂಚಿಕೆ ೩೪<br>Issue 34 |
|---|---|---|

## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಛೇರಿ, ಕೊಡಗು, ಮಡಿಕೇರಿ.

**ಅಧಿಸೂಚನೆ ಸಂಖ್ಯೆ: 1/2014 ದಿನಾಂಕ: 19.07.2014.**

**ವಿಷಯ:** ಕೊಡಗು ಜಿಲ್ಲೆಗೆ ಹೊಸದಾಗಿ ಮಂಜೂರಾದ 3ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಡಗು, ಮಡಿಕೇರಿ (ಭಾರತೀಯ ದಂಡ ಸಂಹಿತೆ 376ಕ್ಕೆ ಸಂಬಂಧಿಸಿದ ಪ್ರಕರಣಗಳನ್ನು ನಡೆಸಲು) ಇಲ್ಲಿಗೆ ಮಂಜೂರಾದ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 74 ಎಲ್‌ಸಿಇ 2013 ಬೆಂಗಳೂರು, ದಿನಾಂಕ: 13.08.2013.
2. ಗೌರವಾನ್ವಿತ ಉಚ್ಚ ನ್ಯಾಯಾಲಯದ ಮೆಮೋ ಸಂಖ್ಯೆ: ಜಿ.ಒ.ಬಿ **II** 168/2013 ದಿನಾಂಕ: 26.08.2013.
3. ಗೌರವಾನ್ವಿತ ಉಚ್ಚ ನ್ಯಾಯಾಲಯದ ಪತ್ರದ ಸಂಖ್ಯೆ: ಎಲ್.ಸಿ.ಎ **II** 128/2012 **(S/f)** ದಿನಾಂಕ: 11.10.2013.
4. ಕರ್ನಾಟಕ ಅಧೀನ ನ್ಯಾಯಾಲಯಗಳ ಹುದ್ದೆಗಳ ನೇಮಕಾತಿ ನಿಯಮಗಳು/ ವಿಧಾನಗಳು–1982.
5. ಕರ್ನಾಟಕ ಅಧೀನ ನ್ಯಾಯಾಲಯಗಳ ಹುದ್ದೆಗಳ ನೇಮಕಾತಿ ನಿಯಮಗಳು/ವಿಧಾನಗಳು (ತಿದ್ದುಪಡಿ) 2007.
6. ಕಛೇರಿ ಟಿಪ್ಪಣಿಯ ಆದೇಶ ದಿನಾಂಕ: 18.07.2014.

ಮೇಲ್ಕಂಡ ಉಲ್ಲೇಖ 1 ಮತ್ತು 2ರಂತೆ 3 ಬೆರಳಚ್ಚುಗಾರರು ಹಾಗೂ 2 ನಕಲು–ಬೆರಳಚ್ಚುಗಾರರ ಹುದ್ದೆಗಳು ಮಂಜೂರಾಗಿದ್ದು ಈ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವಂತೆ ಉಲ್ಲೇಖ 3ರಂತೆ ನಿರ್ದೇಶಿಸಿದ್ದು ಅದರಂತೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ಅಧಿಸೂಚನೆಯೊಂದಿಗೆ ಲಗತ್ತಿಸಿರುವ ನಮೂನೆಯ ಬೆರಳಚ್ಚು ಪ್ರತಿ ಅಥವಾ ಗಣಕೀಕೃತ ಪ್ರತಿಯಲ್ಲಿ ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 23.08.2014 ಸಂಜೆ: 5–00 ಗಂಟೆ

**ಅರ್ಜಿ ಸಲ್ಲಿಸಬೇಕಾದ ವಿಳಾಸ:** ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಡಗು, ಮಡಿಕೇರಿ.

**1. ಬೆರಳಚ್ಚುಗಾರರು (Typist): 3 ಹುದ್ದೆಗಳು:**

**ಎ) ವೇತನ ಶ್ರೇಣಿ:** ₹.11600–200–12000–250–13000–300–14200–350–15600–400–17200–450–19000–500–21000 ಹಾಗೂ ಇತರೆ ಭತ್ಯೆಗಳು.

**ಬಿ) ಹುದ್ದೆಗಳ ವರ್ಗೀಕರಣ:**

| ಪ್ರವರ್ಗ | ಮ.ಅ | ಗ್ರಾ.ಅ | ಒಟ್ಟು |
|---|---|---|---|
| ಪ್ರವರ್ಗ–1 | – | 1 | 1 |
| ಪ್ರವರ್ಗ–2ಎ | – | 1 | 1 |
| ಸಾ.ಅ | 1 | – | 1 |
| **ಒಟ್ಟು** | **1** | **2** | **3** |

**ಸಿ) ಶೈಕ್ಷಣಿಕ ವಿದ್ಯಾರ್ಹತೆ:**

**i)** ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ii)** ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಪ್ರೌಢ ದರ್ಜೆ ಪರೀಕ್ಷೆ **(Senior Grade)** ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**iii)** ಆದೇಶ ಸಂಖ್ಯೆಃ ಡಿಪಿಎಆರ್ 59 ಎಸ್‌ಸಿಆರ್ 2012 ದಿನಾಂಕಃ 07.07.2012ರ ಪ್ರಕಾರ ದಿನಾಂಕಃ 22.03.2012ರಿಂದ ಜಾರಿಗೆ ಬಂದಿರುವಂತೆ ಕಂಪ್ಯೂಟರ್ ಜ್ಞಾನ ಕಡ್ಡಾಯ.

**ಆಯ್ಕೆ ವಿಧಾನಃ** ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿ ಮೂಲಕ ಆಯ್ಕೆ ಮಾಡಲಾಗುವುದು.

2) **ನಕಲು–ಬೆರಳಚ್ಚುಗಾರರು (Typist-Copyist)ಃ 2 ಹುದ್ದೆಗಳು**

ಎ) **ವೇತನ ಶ್ರೇಣಿಃ** ₹.11600–200–12000–250–13000–300–14200–350–15600–400–17200–450–19000–500–21000 ಹಾಗೂ ಇತರೆ ಭತ್ಯೆಗಳು.

ಬಿ) **ಹುದ್ದೆಗಳ ವರ್ಗೀಕರಣಃ**

| ಪ್ರವರ್ಗ | ಗ್ರಾ.ಅ | ಒಟ್ಟು |
|---|---|---|
| ಪರಿಶಿಷ್ಟ ಜಾತಿ | 1 | 1 |
| ಸಾ.ಅ | 1 | 1 |
| ಒಟ್ಟು | 2 | 2 |

ಸಿ) **ಶೈಕ್ಷಣಿಕ ವಿದ್ಯಾರ್ಹತೆಃ**

I. ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

II. ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಕಿರಿಯ ದರ್ಜೆ (**Junior Grade**) ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

III. ಆದೇಶ ಸಂಖ್ಯೆಃ ಡಿಪಿಎಆರ್ 59 ಎಸ್‌ಸಿಆರ್ 2012 ದಿನಾಂಕಃ 07.07.2012ರ ಪ್ರಕಾರ ದಿನಾಂಕಃ 22.03.2012ರಿಂದ ಜಾರಿಗೆ ಬಂದಿರುವಂತೆ ಕಂಪ್ಯೂಟರ್ ಜ್ಞಾನ ಕಡ್ಡಾಯ.

**ಆಯ್ಕೆ ವಿಧಾನಃ** ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿ ಮೂಲಕ ಆಯ್ಕೆ ಮಾಡಲಾಗುವುದು.

**ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಸಂಕ್ಷಿಪ್ತ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು.**

| | |
|---|---|
| ಸಾ.ಅ – ಸಾಮಾನ್ಯ ಅಭ್ಯರ್ಥಿ | ಪ.ಜಾ – ಪರಿಶಿಷ್ಟ ಜಾತಿ |
| ಪ.ಪಂ – ಪರಿಶಿಷ್ಟ ಪಂಗಡ | ಗ್ರಾ.ಅ – ಗ್ರಾಮೀಣ ಅಭ್ಯರ್ಥಿ |
| ಮ.ಅ – ಮಹಿಳಾ ಅಭ್ಯರ್ಥಿ | ಯೋ.ನಿ.ಅ – ಯೋಜನಾ ನಿರಾಶ್ರಿತ ಅಭ್ಯರ್ಥಿ |
| ಕ.ಮಾ.ಅ – ಕನ್ನಡ ಮಾಧ್ಯಮ ಅಭ್ಯರ್ಥಿ | ಅಂ.ಅ – ಅಂಗವಿಕಲ ಅಭ್ಯರ್ಥಿ |
| ಮಾ.ಸೈ – ಮಾಜಿ ಸೈನಿಕ | |

**I. ವಯೋಮಿತಿಃ–**

ಅ) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕಃ 23.08.2014ಕ್ಕೆ ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ) **ಗರಿಷ್ಠ ವಯೋಮಿತಿ ಃ**

ಸಾಮಾನ್ಯ ಅಭ್ಯರ್ಥಿಗಳಿಗೆ .................................. ಃ 35 ವರ್ಷಗಳು

2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳಿಗೆ .................... ಃ 38 ವರ್ಷಗಳು

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ–1ರ ಅಭ್ಯರ್ಥಿಗಳಿಗೆ } : 40

ಇ) ಮಾಜಿ ಸೈನಿಕರಿಗೆ, ವಿಧವೆಯರಿಗೆ ಮತ್ತು ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

ಈ) ಯಾವುದೇ ವರ್ಗಗಳ ಮಹಿಳಾ ಹಾಗೂ ಗ್ರಾಮೀಣ ಮೀಸಲಾತಿ ಇರುವ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದ ಪಕ್ಷದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗಗಳ ಅರ್ಹ ಇತರ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ ಪರಿಶಿಷ್ಟ ಜಾತಿಗೆ ಮೀಸಲಾದ ಹುದ್ದೆಯನ್ನು ಹೊರತುಪಡಿಸಿ ಇತರೆ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

**II ಪರಿವೀಕ್ಷಣಾ ಅವಧಿಃ**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**III ಪಿಂಚಣಿ ಸೌಲಭ್ಯಃ** ಸರ್ಕಾರದ ಆದೇಶ ಸಂಖ್ಯೆಃ ಎಫ್.ಡಿ (ಎಸ್.ಪಿ.ಎಲ್)/04/ಪಿ.ಇ.ಟಿ/2005 ದಿನಾಂಕಃ 31.03.2006ರಂತೆ ಅನ್ವಯಿಸುವುದು.

**IV ಪ್ರಮುಖ ಸೂಚನೆಗಳು ಃ–**

ಅರ್ಜಿಯೊಂದಿಗೆ ಅಭ್ಯರ್ಥಿಗಳು ಕೆಳಕಂಡ ದಾಖಲೆಗಳ ಒಂದೊಂದು ಜೆರಾಕ್ಸ್ ಪ್ರತಿಯನ್ನು ಸ್ವಯಂ ದೃಢೀಕರಿಸಿ ಲಗತ್ತಿಸಬೇಕು. (ಮೂಲ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಬಾರದು) ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಸಂಬಂಧಪಟ್ಟ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದ ಒಳಗೆ ಪಡೆದಿರಬೇಕು. ಹುದ್ದೆಗೆ ನಿಗದಿಪಡಿಸಿರುವಂತಹ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿ ಹಾಗೂ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.

1) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸ ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿತಕ್ಕದ್ದು.
2) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.
3) ಎಸ್.ಎಸ್.ಎಲ್.ಸಿ ಅಂಕಪಟ್ಟಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿ ಹಾಗೂ ಸಂಬಂದಪಟ್ಟ ಅರ್ಹತಾ ಪರೀಕ್ಷೆಯ ಅಂಕಪಟ್ಟಿಗಳನ್ನು ಲಗತ್ತಿಸಬೇಕು.
4) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ–ಡಿ ಯಲ್ಲಿ, ಪ್ರವರ್ಗ –1ರ ಅಭ್ಯರ್ಥಿಗಳು ನಮೂನೆ – ಇ ನಲ್ಲಿ ಮತ್ತು 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ – ಎಫ್ ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಲಗತ್ತಿಸಬೇಕು.
5) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃಸಿಆಸುಇ/96/ಸೇನನಿ/2005 ದಿನಾಂಕಃ 10.08.2005ರ ಪ್ರಕಾರ ನಿಗದಿತ ನಮೂನೆ–2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮಿಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
6) ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣಪತ್ರ ನಮೂನೆ–2ರ ಜೊತೆ ನಮೂನೆ–1ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
7) ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
8) ಸರ್ಕಾರಿ ಅಥವಾ ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರವೇ ಸಲ್ಲಿಸತಕ್ಕದ್ದು.
9) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆಯ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ವಿದ್ಯಾ ಸಂಸ್ಥೆಯ ಮುಖ್ಯೋಪಾಧ್ಯಾಯರು/ಪ್ರಾಂಶುಪಾಲರಿಂದ ಪಡೆದ ನಡತೆ ಪ್ರಮಾಣ ಪತ್ರ ಲಗತ್ತಿಸತಕ್ಕದ್ದು.
10) ಸ್ವಯಂ ವಿಳಾಸವಿರುವ ₹. 6/–ರ ಅಂಚೆ ಚೀಟಿ (**postal stamp**) ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
11) ಅರ್ಜಿಯನ್ನು ಕಳುಹಿಸುವ ಲಕೋಟೆಯ ಮೇಲೆ ದಪ್ಪ ಅಕ್ಷರಗಳಲ್ಲಿ ಅರ್ಜಿ ಸಲ್ಲಿಸುವ ಹುದ್ದೆಯ ಹೆಸರನ್ನು ನಮೂದಿಸಿರಬೇಕು.

**V ಅಭ್ಯರ್ಥಿಗಳಿಗೆ ಸೂಚನೆಗಳುಃ**

1) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸುವುದು ಕಂಡು ಬಂದಲ್ಲಿ ಅಂತಹ ಅಭ್ಯರ್ಥಿಗಳನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.
2) ಅಪೂರ್ಣವಾಗಿರುವ ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3) ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕ ಅಂದರೆ 23.08.2014ರ ಸಂಜೆ 5.00 ಗಂಟೆಯ ಒಳಗಾಗಿ ಬಂದ ಅಥವಾ ಸಲ್ಲಿಸಿದ ಅರ್ಜಿಗಳನ್ನು ಮಾತ್ರ ಪರಿಗಣಿಸಲಾಗುವುದು ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
4) ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
5) ಸಂದರ್ಶನಕ್ಕೆ ಕರೆದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಿಂದಲೇ ಹಾಜರಾಗತಕ್ಕದ್ದು.
6) ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲಾಗುವುದಿಲ್ಲ.
7) ಈ ಅಧಿಸೂಚನೆಯಲ್ಲಿ ಹೊರಡಿಸಿರುವ ಹುದ್ದೆಗಳು ಬದಲಾವಣೆಯಾಗುವ ಸಾಧ್ಯತೆಯಿರುತ್ತದೆ.

**ವಿಶೇಷ ಸೂಚನೆಃ**

ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ಹೊಸದಾಗಿ ಸೃಜಿಸಲಾದ ನ್ಯಾಯಾಲಯವು ಕಾರ್ಯಾರಂಭ ಮಾಡಿದ ನಂತರ ನೀಡಲಾಗುವುದು.

**ಸಿ.ಬಿ.ಹಿಪ್ಪರಗಿ**

ಪ್ರಧಾನ ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರು, ಕೊಡಗು, ಮಡಿಕೇರಿ.

**ಅರ್ಜಿ ನಮೂನೆ**

ಸ್ವದೃಢೀಕೃತ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸುವುದು.

ಇವರಿಗೆಃ

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಡಗು, ಮಡಿಕೇರಿ– 571201.

ಮಾನ್ಯರೇ,

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧಿಸೂಚನೆ ಸಂಖ್ಯೆಃ 1/2014 ದಿನಾಂಕಃ 19.07.2014ರ ಪ್ರಕಾರ ನಾನು ಕೆಳಕಂಡ ಮಾಹಿತಿಗಳೊಂದಿಗೆ ......................................................ಹುದ್ದೆಗೆ ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸುತ್ತಿದ್ದೇನೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| | | | | | |
|---|---|---|---|---|---|
| 1. | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | | |
| 2. | ತಂದೆ/ ಗಂಡನ ಹೆಸರು | | | | |
| 3. | ತಾಯಿಯ ಹೆಸರು | | | | |
| 4. | ಜನ್ಮ ದಿನಾಂಕ | | | | |
| 5. | ವಯಸ್ಸು<br>(ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಃ 23.08.2014ಕ್ಕೆ ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | | ದಿನಗಳು |
| | | | | | |
| 6. | ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ | | | | |
| 7. | ಲಿಂಗ | ಪುರುಷ | | | ಮಹಿಳೆ |
| | | | | | |
| 8. | ರಾಷ್ಟ್ರೀಯತೆ ಮತ್ತು ಧರ್ಮ | | | | |
| 9. | ಜಾತಿ / ಉಪಜಾತಿ | | | | |
| 10. | ವಿವಾಹಿತರಾಗಿದ್ದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ? | | | | |
| 11. | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ? | ಹೌದು | | ಇಲ್ಲ | |
| | | | | | |
| 12. | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರಾ ಅಥವಾ ತೆಗೆದು ಹಾಕಲ್ಪಟ್ಟಿದ್ದೀರ? | ಹೌದು | | ಇಲ್ಲ | |
| | | | | | |
| 13. | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ?<br>(ಸರ್ಕಾರಿ ಸೇವೆಯಲ್ಲಿದ್ದಲ್ಲಿ, ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪತ್ರದ ನಕಲನ್ನು ಕಡ್ಡಾಯವಾಗಿ ಲಗತ್ತಿಸಬೇಕು) | ಹೌದು( ) | | ಇಲ್ಲ ( ) | |
| 14. | ಕೋರುವ ಮೀಸಲಾತಿಗಳು<br>(ಕೋರುವ ಮೀಸಲಾತಿಯನ್ನು √ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ–1 |
| | | | | | |
| | | 2–ಎ | 2–ಬಿ | 3–ಎ | 3–ಬಿ |
| | | | | | |
| 15. | ನೀವು ಈ ಯಾವುದಾದರೂ ಮಿಸಲಾತಿ ಅಡಿಯಲ್ಲಿ ಬರುತ್ತೀರಾ?<br>(ಸೇರುವ ಮೀಸಲಾತಿಯನ್ನು √ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಮಾ.ಸೈ | | ಅಂ.ಅ |
| 16. | ಶೈಕ್ಷಣಿಕ ವಿದ್ಯಾರ್ಹತೆಃ<br>(ಅನ್ವಯಿಸುವ ವಿದ್ಯಾರ್ಹತೆಯ ಅಂಕಣಗಳನ್ನು ಮಾತ್ರ ಭರ್ತಿ ಮಾಡುವುದು)<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ಉತ್ತೀರ್ಣ ಹೊಂದಿದ ವರ್ಷ | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು | ಶೇಕಡಾವಾರು ಅಂಕಗಳು |
| | ಎಸ್‌ಎಸ್‌ಎಲ್‌ಸಿ / ತತ್ಸಮಾನ ವಿದ್ಯಾರ್ಹತೆ | | | | |
| | ಕನ್ನಡ ಬೆರಳಚ್ಚು (ಕಿರಿಯ ಶ್ರೇಣಿ) | | | | |
| | ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ) | | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | | |
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | | |
| | ಇತರೆ ಯಾವುದೇ ವಿದ್ಯಾರ್ಹತೆ | | | | |

ಸೂಚನೆಃ ಅಭ್ಯರ್ಥಿಗಳು ಎಲ್ಲಾ ಕಾಲಂಗಳನ್ನು ಭರ್ತಿ ಮಾಡತಕ್ಕದ್ದು. ಒಂದು ಹುದ್ದೆಗೆ ಒಂದು ಅರ್ಜಿಯನ್ನು ಮಾತ್ರ ಸಲ್ಲಿಸತಕ್ಕದ್ದು,

**ಘೋಷಣೆಃ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ಸತ್ಯವಾಗಿದ್ದು ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ತಾವು ತೆಗೆದುಕೊಳ್ಳುವ ತೀರ್ಮಾನಗಳಿಗೆ ಬದ್ಧನಾಗಿರುತ್ತೇನೆ/ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡ ಪಕ್ಷದಲ್ಲಿ ಕೊಡಗು ಜಿಲ್ಲೆಯ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿರುತ್ತೇನೆ/ಸಿದ್ಧಳಿರುತ್ತೇನೆ.

ದಿನಾಂಕಃ ಅಭ್ಯರ್ಥಿಯ ಸಹಿ

ಸ್ಥಳಃ

**ಸೂಚನೆಃ** ಅಭ್ಯರ್ಥಿಗಳು ತಮ್ಮ ಸ್ವವಿಳಾಸವಿರುವ ರೂ. 6/– ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಕಡ್ಡಾಯವಾಗಿ ಲಗತ್ತಿಸಬೇಕು.

**PR. 75**

**SC.3**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

## IN THE COURT OF THE IV ADDL. CITY CIVIL JUDGE MAYOHALL, CCH-21 AT BANGALORE

**P & SC NO.25027/2014, HG. DT. 11.09.2014**

**PETITIONER:**

1. Smt. T. S. Parvathi, aged 46 years, W/o Late M.R. Ravi Varma,
2. Ms. B. R. Vidya Varma, aged 26 Years, D/o Late M. R. Ravi Varma, Both residing at No. 21/1, "Rangavalli Residency", Flat No. S-1, 4th Main, 1st Cross, Venkatappa Layout, Sanjaynagar, Bangalore-94.

**V/s**

**RESPONDENT** **.... NIL**

**PUBLIC NOTICE**

Notice is hereby given that a petition has been made to this Court under Section 278 of the Indian Succession Act, for grant of Letter of Administration to the properties and credit of the deceased Sri. M. R. Ravi Varma, who died on 22.11.2012 at Bangalore.

Be it known that No caveat has been entered and the said petition is posted for hearing on **11.09.2014 at 11'O clock**. Any person's claiming to have any interest may come and participate in the proceedings before grant of Letter of Administration.

**SCHEDULE**

1. Site No. 324, at Anandhasagara Layout situated in land bearing Sy. Nos. 271/1, 271/2, 272/1, 275, 280, 283, 265/2, 273/1, 273/2, 274/1, 274/2, 282, 265/1, 265/2, 266/2 situated in Belavadi Village, Ilawala Hobli, Mysore Taluk, Measuring East to West 9 mtrs., and North to South (15.68+15.59)/2 mtrs., in all measuring 142.90 Sq. mtrs.
2. Flat No. S-1 (South facing) on 2nd Floor, ``Rangavalli Residency'' constructed on property bearing Municipal No.21/1 (Old No.21/1 and 21/2B) measuring built up area of 550 Sq.ft. with 191.66 Sq.ft undivided interest in the land, situated at 1st Cross, Venkatappa Layout, Geddalahalli, BBMP Ward No.100, Bangalore.

Given under my hand and the seal of the Court, this that 17th day of july, 2014.

By Order of the Court,
Assistant Registrar,
City Civil Court, Mayohall Unit, Bangalore.

**PD. 42**
**SC - 5**

## FORM IV
## (See Rule 12)
## NOTICE

It is hereby notified that the undersigned has changed her name from **RENUKA VENKATESH RAGHUNATHI to RENUKA MOHAN NAIK**

**P.D. C/n 94**
**SC- 10**

**RENUKA VENKATESH RAGHUNATHI**

## IN THE COURT OF IV ADDL. CITY CIVIL JUDGE, MAYO HALL, BANGALORE CCH-21

**P & S.C.NO.25001/2014, HG: 22.08.2014**

**PETITIONER:**

MR.GEORGE MAMMEN S/o Late Mr.K.V.Mammen, residing at 2412 NW, 164th Terrace, Edmond, OK 73013, U.S.A, Represented by his GPA Holder MR. JOSE KOSHY S/o late Mr V.J. Koshy Residing at TP-1, ``Harmony Homes'' 4/2 Hennur Main Road 3rd HRBR Layout Bangalore-560043

**VERSUS**

**RESPONDENT** **....** NIL

**PUBLIC NOTICE**

Notice is hereby given that a petition has been made to this Court under part IX Chapter IV, Section 278 of the Indian Succession Act, 1925 for grant of Letters of Adminstration of the Will dated 25.07.1997 of the deceased late K.V. Mammen, who died on 29.12.2004 at Bangalore.

Be it known that No Caveat has been entered and the said petition is posted for hearing on **22.08.2014 at 11:00 O'Clock**, Any person/s claiming to have any interest may come and participate in the proceedings before grant of Letters of Administration

**SCHEDULE**

**Immovables like:**

1. No. 507, 8th Block 1st Main Koramangala Bangalore-560095 PID No.67-6-507 Measuring 204.16 sq meters

Given under my hand and seal of the Court, this the 23rd of day of July, 2014.

By Order of the Court
Assistant Registrar
City Civil Court, Mayo Hall Unit, Bangalore

**P.D. 43**
**SC - 5**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## IN THE COURT OF THE CITY CIVIL JUDGE COURT HALL No. 21 MAYO HALL UNIT CIVIL STATION, BANGALORE

### HGN: 03-09-2014

**P & S.C. No.-25042 of 2013**

**In the matter of the Will of MERVYN BERNARD SILGARDO: Deceased.**

Mrs. Ivannah Silgardo,
Christian, aged about 79 years,
Wife of Late, Mervyn Bernard Silgardo
and presently residing at Flat No.T-1,
"Plumeria" 1, John Armstrong Road,
Richards Town, Bangalore - 560 005.
} **PETITIONER**

Notice is hereby given that a petition has been made to this Hon' ble Court for a grant of probate of the Will dated 19$^{th}$ June 2001 to the Petitioner above- named, the Executrix named in the said Will dated 19th June 2001 of Mervyn Bernard Silgardo, late of Flat No. T-1, "Plumeria", 1, John Armstrong Road, Richards Town, Bangalare - 560 005, who died at Bangalore on the 11th day of November, 2008.

Be it known that no caveat has been entered and that the said petition is posted for hearing on the 3rd September 2014 and all persons claiming to have any interest in the Estate of the Deceased may come and see the proceedings before the grant of probata of the aforesaid will dated 19th June 2001.

Given under my hand and the seal of this Court this the 6th day of August, 2014.

By Order of the Court.

Assistant Registrar
City Civil Court
Mayo Hall Unit, Bangalore

**PD. 44**
**SC. 5**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59